# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 986 |
| ಮಾನ್ಯ ಸದಸ್ಯರ ಹೆಸರು | ಡಾ॥ ತೇಜಸ್ವಿನಿ ಗೌಡ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 23.09.2021 |

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಈವರೆಗೆ ಎಷ್ಟು ಜನರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ಪ್ರಧಾನ ಮಾಡಲಾಗಿದೆ; (ವಿಶ್ವವಿದ್ಯಾಲಯವಾರು ಸಂಪೂರ್ಣ ವಿವರ ನೀಡುವುದು) | ರಾಜ್ಯದ ಸಾರ್ವಜನಿಕ ವಿಶ್ವವಿದ್ಯಾಲಯಗಳಲ್ಲಿ ಒಟ್ಟು 1856 ಜನರಿಗೆ ಹಾಗೂ ಖಾಸಗಿ ವಿಶ್ವವಿದ್ಯಾಲಯಗಳಲ್ಲಿ ಒಟ್ಟು 23 ಜನರಿಗೆ ಈವರೆಗೆ ಗೌರವ ಡಾಕ್ಟರೇಟ್ ಪದವಿಯನ್ನು ಪ್ರಧಾನ ಮಾಡಲಾಗಿದೆ. ವಿಶ್ವವಿದ್ಯಾಲಯವಾರು ವಿವರ ಅನುಬಂಧ–1 ರಲ್ಲಿ ಒದಗಿಸಿದೆ. |
| (ಆ) | ಗೌರವ ಡಾಕ್ಟರೇಟ್ ಪದವಿಯ ಪರಿಗಣನೆಗೆ ಇರುವ ಮಾನದಂಡಗಳೇನು; | ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ರ ಪ್ರಕರಣ 69 ರಲ್ಲಿ ನಿಗದಿಪಡಿಸಿರುವ ಮಾನದಂಡ ಹಾಗೂ ರಾಜ್ಯಪಾಲರ ಸಚಿವಾಲಯದ ಸುತ್ತೋಲೆ ಸಂ. GS 02 GUM 2016, dated:18.02.2016ರಲ್ಲಿ ವಿವರಿಸಿರುವ ಪ್ರಕ್ರಿಯೆಗಳನ್ನು ಅನುಸರಿಸಿ ರಾಜ್ಯದ ಸಾರ್ವಜನಿಕ ವಿಶ್ವವಿದ್ಯಾಲಯಗಳಲ್ಲಿ ಗೌರವ ಡಾಕ್ಟರೇಟ್ ಪದವಿಗಳನ್ನು ನೀಡಲಾಗುತ್ತಿದೆ. ಅಧಿನಿಯಮದ ಉದ್ಧೃತ ಭಾಗ ಮತ್ತು ಸುತ್ತೋಲೆ ಪ್ರತಿಯನ್ನು ಅನುಬಂಧ–2ರಲ್ಲಿ ಒದಗಿಸಿದೆ. |
| (ಇ) | ಹೊರ ರಾಜ್ಯ ಹಾಗೂ ಹೊರ ದೇಶಗಳ ವಿಶ್ವವಿದ್ಯಾಲಯಗಳಿಂದ ಪಡೆದಿರುವ ಡಾಕ್ಟರೇಟ್‌ಗಳ ಬಗ್ಗೆ ವಿವರ ನೀಡುವುದು; ಆಯಾ ವಿಶ್ವವಿದ್ಯಾಲಯಗಳು ನೀಡಿರುವ ಡಾಕ್ಟರೇಟ್‌ಗಳ ಪವಿತ್ರತೆ ಬಗ್ಗೆ ಮಾಹಿತಿ ನೀಡುವುದು; | ಹೊರ ರಾಜ್ಯ ಹಾಗೂ ಹೊರ ದೇಶಗಳ ವಿಶ್ವವಿದ್ಯಾಲಯಗಳಿಂದ ಪಡೆದಿರುವ ಡಾಕ್ಟರೇಟ್‌ಗಳ ಬಗ್ಗೆ ವಿವರವು ಉನ್ನತ ಶಿಕ್ಷಣ ಇಲಾಖೆಯಲ್ಲಿ ಲಭ್ಯವಿರುವುದಿಲ್ಲ. |
| (ಈ) | ಅನೇಕ ಪ್ರಕರಣಗಳಲ್ಲಿ ವಿಶ್ವವಿದ್ಯಾಲಯಗಳಿಂದ ನಕಲಿ/ಅನರ್ಹ ಡಾಕ್ಟರೇಟ್ ಪಡೆದಿರುವ ವ್ಯಕ್ತಿಗಳ ಮಾಹಿತಿ ನೀಡುವುದು; ಹಗರಣಗಳಲ್ಲಿ, ಆಪಾದನೆಗಳಲ್ಲಿ, ಅಕ್ರಮ ವಾಮ ಮಾರ್ಗಗಳಲ್ಲಿ ಡಾಕ್ಟರೇಟ್ ನೀಡಿರುವ ವಿಶ್ವವಿದ್ಯಾಲಯಗಳಾವುವು; ಪಡೆದಿರುವ ವ್ಯಕ್ತಿಗಳ ಪ್ರಕರಣ ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದ ಸಾರ್ವಜನಿಕ ವಿಶ್ವವಿದ್ಯಾಲಯಗಳಿಂದ ನಕಲಿ/ಅನರ್ಹ ಡಾಕ್ಟರೇಟ್ ಪದವಿಯನ್ನು ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br><br>ಮುಂದುವರೆದು, ಖಾಸಗಿ ವಿಶ್ವವಿದ್ಯಾಲಯವಾದ ಅಲೆಯನ್ಸ್ ವಿಶ್ವವಿದ್ಯಾಲಯದಿಂದ ಶ್ರೀ ಬಿ.ಎಸ್. ಶಿವಣ್ಣ ಇವರಿಗೆ ಅಕ್ರಮವಾಗಿ ಗೌರವ ಡಾಕ್ಟರೇಟ್ ನೀಡಿರುವ ಕುರಿತು ಸರ್ಕಾರಕ್ಕೆ ದೂರು ಸಲ್ಲಿಕೆಯಾಗಿರುತ್ತದೆ. |

| | | |
|---|---|---|
| | | ಅಲಿಯನ್ಸ್ ವಿಶ್ವವಿದ್ಯಾಲಯವು ರಾಜ್ಯ ಶಾಸನ ರಚನೆಯ ಮೂಲಕ ಖಾಸಗಿ ವಿಶ್ವವಿದ್ಯಾಲಯವಾಗಿ ಸ್ಥಾಪಿತಗೊಂಡಿರುತ್ತದೆ ಹಾಗೂ ಅಲಯನ್ಸ್ ಖಾಸಗಿ ವಿಶ್ವವಿದ್ಯಾಲಯದ ಅಧಿನಿಯಮ, 2010ರ ಪ್ರಕರಣ 32(viii) ರಲ್ಲಿ ಗೊತ್ತುಪಡಿಸಿರುವಂತೆ ಗೌರವ ಡಾಕ್ಟರೇಟ್ ಪದವಿ ನೀಡಲು ಅಲಯನ್ಸ್ ವಿಶ್ವವಿದ್ಯಾಲಯವು ಸಕ್ಷಮವಾಗಿರುತ್ತದೆ. ಪ್ರಸ್ತಾಪಿತ ದೂರಿಗೆ ಸಂಬಂಧಿಸಿದ ಗೌರವ ಡಾಕ್ಟರೇಟ್ ಪದವಿಯನ್ನು 2017ರಲ್ಲಿ ಅಧಿಕೃತವಾಗಿ ನೀಡಿರುವುದಾಗಿ ಅಲಯನ್ಸ್ ವಿಶ್ವವಿದ್ಯಾಲಯದಿಂದ ದೃಢಪಡಿಸಲಾಗಿದೆ. |
| (ಉ) | ವಿಶ್ವವಿದ್ಯಾಲಯಗಳಲ್ಲಿ ಅಪಾರ ಪರಿಶ್ರಮದಿಂದ ಪರಿಶೋಧನೆ ಮಾಡಿ ಪಡೆಯುವ ಅಧಿಕೃತ ಡಾಕ್ಟರೇಟ್ ಪದವಿಗಳ ಘನತೆ ಕುಗ್ಗಿಸುವ, ಇಂತಹ ಶಿಫಾರಸ್ಸು ಹಣದ ಪ್ರಭಾವದಿಂದ ಪಡೆದ ನಕಲಿ ಗೌರವ ಡಾಕ್ಟರೇಟ್ ದಂಧೆಗೆ ಕಡಿವಾಣ ಹಾಕಲು ಸರ್ಕಾರದ ಕ್ರಮಗಳೇನು? | ಯಾವುದಾದರೂ ಸಂಸ್ಥೆಯು ಯಾವುದೇ ರೀತಿಯ ನಕಲಿ/ ಅನಧಿಕೃತ ಪದವಿ/ಗೌರವ ಡಾಕ್ಟರೇಟ್ ಪದವಿಗಳನ್ನು ಪ್ರಧಾನ ಮಾಡುತ್ತಿರುವುದು/ಪ್ರಧಾನ ಮಾಡಲಿರುವುದು/ ಮಾರಾಟ ಮಾಡುತ್ತಿರುವುದು ಕಂಡು ಬಂದರೆ, ಅದಕ್ಕೆ ಕಾರಣ ಕರ್ತರಾದ ವ್ಯಕ್ತಿ/ಸಂಸ್ಥೆಯ ವಿರುದ್ಧ ಕೂಡಲೇ ಪೋಲೀಸ್ ಠಾಣೆಯಲ್ಲಿ ಪ್ರಥಮ ವರ್ತಮಾನ ವರದಿ ದಾಖಲಿಸಿ ಕ್ರಮ ಜರುಗಿಸುವಂತೆ ಸರ್ಕಾರದ ಆದೇಶ ಸಂಖ್ಯೆ: ಇಡಿ 23 ಯುಎನ್ಇ 2021, ದಿನಾಂಕ: 26.02.2021ರಲ್ಲಿ ತಿಳಿಸಲಾಗಿದೆ. (ಅನುಬಂಧ-3) |

ಸಂಖ್ಯೆ: ಇಡಿ 237 ಯುಎನ್ಇ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು

ಅನುಬಂಧ–1

ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಈವರೆಗೆ ಗೌರವ ಡಾಕ್ಟರೇಟ್ ಪದವಿಯನ್ನು ಪ್ರಧಾನ ಮಾಡಿರುವ ಅಂಕಿ–ಅಂಶಗಳ ವಿವರ

| ಕ್ರ.ಸಂ. | ವಿಶ್ವವಿದ್ಯಾಲಯದ ಹೆಸರು | ಗೌರವ ಡಾಕ್ಟರೇಟ್ ಪದವಿ ಪಡೆದ ಅಂಕಿ–ಅಂಶಗಳ ವಿವರ |
|---|---|---|
| 1 | ಬೆಂಗಳೂರು ವಿಶ್ವವಿದ್ಯಾಲಯ | 58 |
| 2 | ಮೈಸೂರು ವಿಶ್ವವಿದ್ಯಾಲಯ | 134 |
| 3 | ಕರ್ನಾಟಕ ವಿಶ್ವವಿದ್ಯಾಲಯ | 108 |
| 4 | ಕುವೆಂಪು ವಿಶ್ವವಿದ್ಯಾಲಯ | 46 |
| 5 | ಗುಲ್ಬರ್ಗ ವಿಶ್ವವಿದ್ಯಾಲಯ | 96 |
| 6 | ಮಂಗಳೂರು ವಿಶ್ವವಿದ್ಯಾಲಯ | 61 |
| 7 | ತುಮಕೂರು ವಿಶ್ವವಿದ್ಯಾಲಯ | 65 |
| 8 | ಕನ್ನಡ ವಿಶ್ವವಿದ್ಯಾಲಯ | 1124 |
| 9 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ | 39 |
| 10 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ | 10 |
| 11 | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ | 32 |
| 12 | ದಾವಣಗೆರೆ ವಿಶ್ವವಿದ್ಯಾಲಯ | 09 |
| 13 | ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ | 16 |
| 14 | ರಾಣಿಚನ್ನಮ್ಮ ವಿಶ್ವವಿದ್ಯಾಲಯ | 26 |
| 15 | ಕರ್ನಾಟಕ ರಾಜ್ಯ ಸಂಸ್ಕೃತ ವಿಶ್ವವಿದ್ಯಾಲಯ | 20 |
| 16 | ಕರ್ನಾಟಕ ರಾಜ್ಯ ಡಾ॥ ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ | 07 |
| 17 | ಕರ್ನಾಟಕ ರಾಜ್ಯ ಜಾನಪದ ವಿಶ್ವವಿದ್ಯಾಲಯ | 05 |
| 18 | ಬೆಂಗಳೂರು ನಗರ ವಿಶ್ವವಿದ್ಯಾಲಯ | ಯಾವುದೇ ಗೌರವ ಡಾಕ್ಟರೇಟ್ ಪದವಿಯನ್ನು ಪ್ರಧಾನ ಮಾಡಿರುವುದಿಲ್ಲ. |
| 19 | ಬೆಂಗಳೂರು ಉತ್ತರ ವಿಶ್ವವಿದ್ಯಾಲಯ | ಯಾವುದೇ ಗೌರವ ಡಾಕ್ಟರೇಟ್ ಪದವಿಯನ್ನು ಪ್ರಧಾನ ಮಾಡಿರುವುದಿಲ್ಲ. |
| 20 | ರಾಯಚೂರು ವಿಶ್ವವಿದ್ಯಾನಿಲಯ | ಈ ವಿಶ್ವವಿದ್ಯಾನಿಲಯಗಳು 2020ನೇ ಸಾಲಿನಿಂದ ಪ್ರಾರಂಭಗೊಂಡಿದ್ದು, ಪ್ರಸ್ತುತ ಯಾವುದೇ ಗೌರವ ಡಾಕ್ಟರೇಟ್ ಪದವಿಯನ್ನು ಪ್ರಧಾನ ಮಾಡಿರುವುದಿಲ್ಲ. |
| 21 | ನೃಪತುಂಗ ವಿಶ್ವವಿದ್ಯಾನಿಲಯ | |
| 22 | ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾನಿಲಯ | |
| 23 | ಮಂಡ್ಯ ಏಕೀಕೃತ ವಿಶ್ವವಿದ್ಯಾನಿಲಯ | |
| | ಒಟ್ಟು | 1856 |

## ರಾಜ್ಯದ ಖಾಸಗಿ ವಿಶ್ವವಿದ್ಯಾಲಯಗಳಲ್ಲಿ ಈವರೆಗೆ ಗೌರವ ಡಾಕ್ಟರೇಟ್ ಪದವಿಯನ್ನು ಪ್ರಧಾನ ಮಾಡಿರುವ ಅಂಕಿ-ಅಂಶಗಳ ವಿವರ

| ಕ್ರ.ಸಂ. | ವಿಶ್ವವಿದ್ಯಾಲಯದ ಹೆಸರು | ಗೌರವ ಡಾಕ್ಟರೇಟ್ ಪದವಿ ಪಡೆದ ಅಂಕಿ-ಅಂಶಗಳ ವಿವರ |
|---|---|---|
| 1 | Alliance University | 06 |
| 2 | CMR University | 03 |
| 3 | Srinivasa University | 04 |
| 4 | Sharana Basava University | 06 |
| 5 | The University of Trans-Disciplinary Health, Science & Technology | 04 |
| 6 | Azim Premji University | Nil |
| 7 | Presidency University | Nil |
| 8 | PES University | Nil |
| 9 | Reva University | Nil |
| 10 | Dayananda Sagar University | Nil |
| 11 | JSS Science & Technology University | Nil |
| 12 | KLE University | Nil |
| 13 | Adichunchanagiri University | Nil |
| 14 | Khaja Bhandanawz University | Nil |
| 15 | Sri Satya Sai University for Human Excellance | Nil |
| 16 | Sri Dharmasthala manjunatheshwara University | Nil |
| 17 | Vidya Shilp University | Nil |
| 18 | Garden City University | Nil |
| 19 | NIE University | Nil |
| 20 | MS Ramaiah University of Applied Sciences | - |
| 21 | Rai Technology University | - |
| | Total | 23 |

ಅನುಬಂಧ - 2



ಪ್ರವೇಶಾವಕಾಶ ನೀಡುವಷ್ಟರಮಟ್ಟಿಗೆ ಹೆಚ್ಚಿಸಿ ಅವರಿಗೆ ಪ್ರವೇಶವನ್ನು ನೀಡತಕ್ಕದ್ದು ಮತ್ತು ಅಂಥ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಹಾಗೆ ಮುಚ್ಚಲ್ಪಟ್ಟ ಕಾಲೇಜಿನಿಂದ, ಯಾವ ಕಾಲೇಜಿಗೆ ಅಂಥ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆದಿರುವರೋ ಅಲ್ಲಿಗೆ ವರ್ಗಾಯಿಸತಕ್ಕದ್ದು.

(6) (1)ನೇ ಉಪಪ್ರಕರಣದ ಅಡಿಯಲ್ಲಿ ನೋಟೀಸಿನ ಅವಧಿಯು ಮುಕ್ತಾಯವಾದ ತರುವಾಯ ಮೂವತ್ತು ದಿನಗಳೊಳಗೆ, ಹಾಗೆ ಮುಚ್ಚುವ ಬಗ್ಗೆ ಅನುಮತಿ ನೀಡುವ ಅಥವಾ ತಿರಸ್ಕರಿಸುವ ಯಾವುದೇ ನಿರ್ದೇಶನವನ್ನು ರಾಜ್ಯ ಸರ್ಕಾರವು ನೀಡದಿದ್ದರೆ, (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಕಾಲೇಜನ್ನು ಅಥವಾ ಸಂದರ್ಭಾನುಸಾರ ವ್ಯಾಸಂಗಕ್ರಮವನ್ನು ಮುಚ್ಚಲು ಆಡಳಿತ ಮಂಡಲಿಗೆ ಅನುಮತಿ ನೀಡಲಾಗಿದೆ ಎಂದು ಭಾವಿಸತಕ್ಕದ್ದು.

**66. ಕೆಲವು ಸಂಸ್ಥೆಗಳಿಗೆ ಮನ್ನಣೆ.-** (1) ಸಂಶೋಧನೆ ಅಥವಾ ನಿರ್ದಿಷ್ಟಪಡಿಸಿದ ಅಧ್ಯಯನಗಳನ್ನು ಅಥವಾ ಪರಿಣಿತ ಅಧ್ಯಯನಗಳನ್ನು ನಡೆಸುವ ಕಾಲೇಜನ್ನು ಹೊರತುಪಡಿಸಿ, ವಿಶ್ವವಿದ್ಯಾನಿಲಯ ಪ್ರದೇಶದ ಒಳಗೆ ಅಥವಾ ಹೊರಗೆ ಇರುವ ಯಾವುದೇ ಸಂಸ್ಥೆಯನ್ನು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಅಂಥ ಉದ್ದೇಶಕ್ಕಾಗಿ ಮತ್ತು ಅಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಸಿಂಡಿಕೇಟು, ಮನ್ನಣೆ ಪಡೆದ ಸಂಸ್ಥೆಯೆಂದು ಮನ್ನಣೆ ಕೊಡಬಹುದು.

(2) ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ರೀತಿಯಲ್ಲಿ ಮತ್ತು ಅಂಥ ಕಾರಣಗಳಿಗಾಗಿ, ಅಂಥ ಮನ್ನಣೆಯನ್ನು ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

**67. ಕಾಲೇಜುಗಳ ಪರಿವೀಕ್ಷಣೆ.-** (1) ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜು ಸೇರಿದಂತೆ ಸಂಯೋಜನೆಗೊಂಡ ಪ್ರತಿಯೊಂದು ಕಾಲೇಜು, ಸಿಂಡಿಕೇಟು, ವಿದ್ಯಾವಿಷಯಕ ಪರಿಷತ್ತಿನೊಡನೆ ಸಮಾಲೋಚನೆ ನಡೆಸಿದ ತರುವಾಯ, ಆ ಕಾಲೇಜಿನ ದಕ್ಷತೆಯನ್ನು ಅಥವಾ ಸಂಸ್ಥೆಯು ಸಾಧಿಸಿದ ಶೈಕ್ಷಣಿಕ ಗುಣಮಟ್ಟವನ್ನು ತೀರ್ಮಾನಿಸುವುದಕ್ಕೆ ಅಗತ್ಯವಾಗಬಹುದಾದಂಥ ವರದಿಗಳನ್ನು, ವಿವರ ಪಟ್ಟಿಕೆಗಳನ್ನು ಮತ್ತು ಇತರ ಮಾಹಿತಿಯನ್ನು ರಿಜಿಸ್ಟ್ರಾರರಿಗೆ ಒದಗಿಸತಕ್ಕದ್ದು.

(2) ಸಿಂಡಿಕೇಟು ಅಂಥ ಪ್ರತಿಯೊಂದು ಕಾಲೇಜನ್ನು, ಈ ಬಗ್ಗೆ ರಚಿತವಾದ ಸಮಿತಿಯು ಕಾಲಕಾಲಕ್ಕೆ ಪರಿವೀಕ್ಷಣೆ ನಡೆಸುವಂತೆ ಮಾಡತಕ್ಕದ್ದು.

(3) ಸಿಂಡಿಕೇಟು, ಹಾಗೆ ಪರಿವೀಕ್ಷಿಸಲಾದ ಯಾವುದೇ ಕಾಲೇಜನ್ನು, ನಿರ್ದಿಷ್ಟಪಡಿಸಿದ ಅವಧಿಯೊಳಗೆ ಯಾವುವೇ ವಿಷಯಗಳಿಗೆ ಸಂಬಂಧಿಸಿದಂತೆ ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ಕ್ರಮಕೈಗೊಳ್ಳಲು ಕೋರಬಹುದು.

(4) ಶೈಕ್ಷಣಿಕ, ಆಡಳಿತಾತ್ಮಕ ಹಾಗೂ ಅದಕ್ಕೆ ಪೂರಕವಾದ ಎಲ್ಲಾ ವಿಷಯಗಳ ಸಂಬಂಧವಾಗಿ ವಿಶ್ವವಿದ್ಯಾನಿಲಯವು ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳನ್ನು ಪ್ರತಿಯೊಂದು ಕಾಲೇಜು ಪಾಲಿಸತಕ್ಕದ್ದು.

## ಅಧ್ಯಾಯ XI

## ಪಟ್ಟಿಗೆ ಸೇರಿಸುವಿಕೆ ಮತ್ತು ಪದವಿಗಳು

**68. ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ಅರ್ಹತೆ.-** ಯಾವೊಬ್ಬ ವಿದ್ಯಾರ್ಥಿಯು ಕಾಲ ಕಾಲಕ್ಕೆ ಪರಿನಿಯಮದಿಂದ ನಿಯಮಿಸಬಹುದಾದ ಅಂಥ ಅರ್ಹತೆಗಳನ್ನು ಅವನು ಹೊಂದಿದ್ದ ಹೊರತು, ಪದವಿ ಅಥವಾ ಡಿಪ್ಲೋಮಾ ಅಧ್ಯಯನ ಕ್ರಮಗಳ ಪ್ರವೇಶಕ್ಕೆ ಅರ್ಹನಾಗಿರತಕ್ಕದ್ದಲ್ಲ.

**69. ಗೌರವ ಪದವಿಗಳು.-** (1) ಸಿಂಡಿಕೇಟಿನ ಮೂರನೇ ಎರಡರಷ್ಟಕ್ಕೆ ಕಡಿಮೆ ಇಲ್ಲದ ಸದಸ್ಯರು, ಯಾವೊಬ್ಬ ವ್ಯಕ್ತಿಗೆ, ಅವನ ಶ್ರೇಷ್ಠ ಸಾಧನೆ ಮತ್ತು ಸ್ಥಾನಮಾನದ ಕಾರಣದಿಂದಾಗಿ ಅವರ ಅಭಿಪ್ರಾಯದಲ್ಲಿ ಅಂಥ ಗೌರವ ಪದವಿ ಅಥವಾ ಇತರ ವಿದ್ಯಾವಿಷಯಕ ಪ್ರಶಸ್ತಿಯನ್ನು ಸ್ವೀಕರಿಸಲು ಯೋಗ್ಯ ಮತ್ತು ಸರಿಯಾದ ವ್ಯಕ್ತಿ ಎಂಬ ಆಧಾರದ ಮೇಲೆ ಗೌರವ ಪದವಿ ಅಥವಾ ವಿದ್ಯಾವಿಷಯಕ ಪ್ರಶಸ್ತಿಯನ್ನು ಪ್ರದಾನ ಮಾಡಬೇಕೆಂದು ಶಿಫಾರಸ್ಸು ಮಾಡಿದರೆ, ಸಿಂಡಿಕೇಟು, ಸಂಬಂಧಪಟ್ಟ ವ್ಯಕ್ತಿಗೆ ಅದನ್ನು ಪ್ರದಾನ ಮಾಡಲು ಕುಲಾಧಿಪತಿಯವರ ಅನುಮೋದನೆಗಾಗಿ ಶಿಫಾರಸ್ಸು ಮಾಡಬಹುದು.

(2) ಗೌರವ ಪದವಿಯನ್ನು ಅಥವಾ ಪ್ರಶಸ್ತಿಯನ್ನು ವಿಶೇಷ ಸಂದರ್ಭಗಳಲ್ಲಿ ಮಾತ್ರ ಪ್ರದಾನ ಮಾಡತಕ್ಕದ್ದು. ಅದನ್ನು ಕೇವಲ ಒಂದು ವಾಡಿಕೆಯ ಕ್ರಮವಾಗಿ ಪ್ರದಾನ ಮಾಡತಕ್ಕದ್ದಲ್ಲ. ಸಾಹಿತ್ಯ, ತತ್ವಜ್ಞಾನ, ಕಲೆ, ಸಂಗೀತ, ವರ್ಣಚಿತ್ರಕಲೆ ಅಥವಾ ಕಲೆ, ವಿಜ್ಞಾನ ಅಥವಾ ತಂತ್ರಜ್ಞಾನದ ವ್ಯಾಸಂಗ ವಿಭಾಗಗಳಿಗೆ ವಹಿಸಿಕೊಡಲಾಗಿರುವ ಯಾವುದೇ ಇತರೆ ವಿಷಯದಲ್ಲಿ ಮುನ್ನಡೆಗಾಗಿ ಗಣನೀಯ ಕೊಡುಗೆ ನೀಡಿದ ಅಥವಾ ಶಿಕ್ಷಣದ ಧ್ಯೇಯಗಳಿಗಾಗಿ ವಿಶಿಷ್ಟ ಸೇವೆ ಸಲ್ಲಿಸಿದ ವ್ಯಕ್ತಿಗಳನ್ನು ಅಂಥ ಗೌರವ ಪದವಿಗಳ ನೀಡಿಕೆಯ ಉದ್ದೇಶಕ್ಕಾಗಿ ಗುರುತಿಸತಕ್ಕದ್ದು.

(3) ವಿಜ್ಞಾನ ಅಥವಾ ತಂತ್ರಜ್ಞಾನ ಶಾಖೆಗಳ, ವೈಜ್ಞಾನಿಕ ಮತ್ತು ತಂತ್ರಜ್ಞಾನ ಸಂಸ್ಥೆಗಳಲ್ಲಿ ಯೋಜನೆ, ಸಂಘಟನೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದ ಶಾಖೆಗಳಲ್ಲಿನ ಅಂಥ ವ್ಯಕ್ತಿಗಳಿಗೆ ಡಾಕ್ಟರ್ ಆಫ್ ಸೈನ್ಸ್ (ಡಿಎಸ್‌ಸಿ) ಪದವಿಯನ್ನು ಹಾನರಿಸ್‌ಕಾಸಾ (ಗೌರವ ಪದವಿ) ಆಗಿ ಪ್ರದಾನ ಮಾಡಬಹುದು.

(4) ಪ್ರತಿಷ್ಠಿತ ನ್ಯಾಯವಾದಿಗಳು, ನ್ಯಾಯಾಧೀಶರು, ಜ್ಯೂರಿಗಳು, ರಾಜಕೀಯ ಗಣ್ಯವ್ಯಕ್ತಿಗಳಿಗೆ ಅಥವಾ ಸಾರ್ವಜನಿಕ ಕ್ಷೇತ್ರದ ಧ್ಯೇಯಗಳಿಗಾಗಿ ಗಮನಾರ್ಹ ಕೊಡುಗೆ ನೀಡಿದ ವ್ಯಕ್ತಿಗಳಿಗೆ ಡಾಕ್ಟರ್ ಆಫ್ ಲಾಜ್ (ಎಲ್‌ಎಲ್.ಡಿ) ಪದವಿಯನ್ನು ಹಾನರೀಸ್‌ಕಾಸ್ (ಗೌರವ ಪದವಿ) ಆಗಿ ಪ್ರದಾನ ಮಾಡಬಹುದು.

**70. ಪದವಿ ಅಥವಾ ಡಿಪ್ಲೊಮಾಗಳನ್ನು ಹಿಂತೆಗೆದುಕೊಳ್ಳುವುದು.-** (1) ಯಾವೊಬ್ಬ ವ್ಯಕ್ತಿಯು, ಒಂದು ಪದವಿಯನ್ನು, ಡಿಪ್ಲೊಮಾವನ್ನು ಅಥವಾ ಸರ್ಟಿಫಿಕೇಟನ್ನು ಮೋಸದಿಂದ ಅಥವಾ ಸುಳ್ಳು ಜಾತಿ ಪ್ರಮಾಣಪತ್ರದ ಮೂಲಕ ಪಡೆದುಕೊಂಡಿದ್ದಾನೆಂದು ಕಂಡುಬಂದರೆ, ಸಿಂಡಿಕೇಟಿನ ಒಟ್ಟು ಸದಸ್ಯರ ಬಹುಮತದಿಂದ ಮತ್ತು ಆ ಸಭೆಯಲ್ಲಿ ಹಾಜರಿದ್ದು ಮತ ಚಲಾಯಿಸುವ ಮೂರನೆಯ ಎರಡು ಅಂಶಕ್ಕಿಂತ ಕಡಿಮೆಯಿಲ್ಲದ ಸದಸ್ಯರ ಬಹುಮತದಿಂದ ಅಂಗೀಕೃತವಾದ ನಿರ್ಣಯದ ಮೂಲಕ ವಿದ್ಯಾವಿಷಯಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಸಿಂಡಿಕೇಟ್, ಅಂಥ ಯಾವನೇ ವ್ಯಕ್ತಿಗೆ ಪ್ರದಾನ ಮಾಡಲಾಗಿದ್ದ ಅಥವಾ ಕೊಡಲಾಗಿದ್ದ ಅಂಥ ಯಾವುದೇ ಪ್ರಶಸ್ತಿ, ಪದವಿ, ಡಿಪ್ಲೊಮಾ ಅಥವಾ ವಿಶೇಷಾಧಿಕಾರವನ್ನು ಹಿಂತೆಗೆದುಕೊಳ್ಳಬಹುದು.

(2) ಈ ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧ, ಕೈಗೊಳ್ಳಬೇಕೆಂದು ಪ್ರಸ್ತಾವಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವನಿಗೆ ಅವಕಾಶವನ್ನು ಕೊಟ್ಟ ಹೊರತು, ಯಾವುದೇ ಕ್ರಮ ಕೈಗೊಳ್ಳತಕ್ಕದ್ದಲ್ಲ.

(3) ಸಿಂಡಿಕೇಟು ಅಂಗೀಕರಿಸಿದ ನಿರ್ಣಯದ ಪ್ರತಿಯೊಂದನ್ನು ಸಂಬಂಧಪಟ್ಟ ವ್ಯಕ್ತಿಗೆ ಕೂಡಲೇ ಕಳುಹಿಸತಕ್ಕದ್ದು.

(4) ಸಿಂಡಿಕೇಟು ತೆಗೆದುಕೊಂಡ ತೀರ್ಮಾನದಿಂದ ಬಾಧಿತನಾದ ಯಾವನೇ ವ್ಯಕ್ತಿಯು, ಅಂಥ ನಿರ್ಣಯವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಕುಲಾಧಿಪತಿಗೆ ಅಪೀಲು ಸಲ್ಲಿಸಬಹುದು.

(5) ಅಂಥ ಅಪೀಲಿನ ಮೇಲೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

## ಅಧ್ಯಾಯ XII

## ವಿಶ್ವವಿದ್ಯಾನಿಲಯದ ಪುನರವಲೋಕನಾ ಆಯೋಗ

**71. ವಿಶ್ವವಿದ್ಯಾನಿಲಯದ ಪುನರವಲೋಕನಾ ಆಯೋಗದ ನೇಮಕ.-** (1) ಕುಲಾಧಿಪತಿಯು, ಐದು ವರ್ಷಗಳಿಗೊಮ್ಮೆ, ವಿಶ್ವವಿದ್ಯಾನಿಲಯದ ಕಾರ್ಯನಿರ್ವಹಣೆಯನ್ನು ಪುನರವಲೋಕಿಸುವುದಕ್ಕಾಗಿ ಮತ್ತು ಶಿಫಾರಸ್ಸುಗಳನ್ನು ಮಾಡುವುದಕ್ಕಾಗಿ ಒಂದು ಆಯೋಗವನ್ನು ರಚಿಸತಕ್ಕದ್ದು.

(2) ಆಯೋಗವು, ಮೂವರಿಗೆ ಕಡಿಮೆಯಿಲ್ಲದ ಪ್ರಸಿದ್ಧ ಶಿಕ್ಷಣ ತಜ್ಞರನ್ನು ಒಳಗೊಂಡಿರತಕ್ಕದ್ದು. ಅದರಲ್ಲಿ ಒಬ್ಬನು, ಕುಲಾಧಿಪತಿಯವರು ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ ನೇಮಿಸಿದ ಅಧ್ಯಕ್ಷರಾಗಿರತಕ್ಕದ್ದು.

(3) ಸದಸ್ಯರ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು, ಕುಲಾಧಿಪತಿಯವರು ನಿರ್ಧರಿಸಬಹುದಾದಂಥವುಗಳು ಆಗಿರತಕ್ಕದ್ದು.

(4) ಆಯೋಗವು, ಅದು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಕುಲಾಧಿಪತಿಯವರಿಗೆ ಮತ್ತು ರಾಜ್ಯ ಸರ್ಕಾರಕ್ಕೆ ತನ್ನ ಶಿಫಾರಸ್ಸುಗಳನ್ನು ಮಾಡತಕ್ಕದ್ದು.

(5) ಕುಲಾಧಿಪತಿಯವರು, ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ, ಶಿಫಾರಸ್ಸಿನ ಮೇಲೆ ತಾನು ಸೂಕ್ತವೆಂದು ಭಾವಿಸುವಂಥ ಕ್ರಮವನ್ನು ಕೈಗೊಳ್ಳಬಹುದು.

(6) ರಾಜ್ಯ ಸರ್ಕಾರವು, ಕೈಗೊಂಡ ಕ್ರಮವನ್ನು ವಿವರಿಸುವ ಜ್ಞಾಪನ ಪತ್ರದೊಡನೆ ವರದಿಯ ಒಂದು ಪ್ರತಿಯನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

**72. ಕರ್ನಾಟಕ ರಾಜ್ಯ ಅಂತರ - ವಿಶ್ವವಿದ್ಯಾನಿಲಯ ಮಂಡಲಿ.-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೆ ಕಾನೂನಿನಲ್ಲಿ ಏನೇ ಇದ್ದಾಗ್ಯೂ, ಈ ಕೆಳಕಂಡ ಸದಸ್ಯರನ್ನು ಒಳಗೊಂಡ "ಕರ್ನಾಟಕ ರಾಜ್ಯ ಅಂತರ ವಿಶ್ವವಿದ್ಯಾನಿಲಯ ಮಂಡಲಿ" ಎಂದು ಕರೆಯಲಾಗುವ ಒಂದು ಅಂತರ್ ವಿಶ್ವವಿದ್ಯಾನಿಲಯ ಮಂಡಲಿಯು ಕರ್ನಾಟಕ ರಾಜ್ಯದಲ್ಲಿ ಇರತಕ್ಕದ್ದು :-

(ಎ) ಉನ್ನತ ಶಿಕ್ಷಣದ ಪ್ರಭಾರದಲ್ಲಿರುವ ಸಚಿವರು - ಅಧ್ಯಕ್ಷ,

(ಬಿ) ರಾಜ್ಯದಲ್ಲಿರುವ ಎಲ್ಲಾ ವಿಶ್ವವಿದ್ಯಾನಿಲಯಗಳ ಕುಲಪತಿಗಳು,

(ಸಿ) ಉನ್ನತ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ - ಸದಸ್ಯ ಕಾರ್ಯದರ್ಶಿ,

ಕರ್ನಾಟಕ ರಾಜ್ಯಪಾಲರ ಸಚಿವಾಲಯ
KARNATAKA GOVERNOR'S SECRETARIAT

ಕ್ರಮಾಂಕ
No.

P.B. No. 5033
ರಾಜ ಭವನ, ಬೆಂಗಳೂರು
RAJ BHAVAN, BANGALORE
PIN : 560 001

GS 02 GUM 2016

Date: 18-02-2016

**CIRCULAR**

Hon'ble Governor & Chancellor has noticed that Universities are sending proposals for conferring Honorary Doctorate Degrees in the last minute. In the past, several Universities sent many names for conferring the Honorary Degrees and in respect of many names several criticisms have been aired in the public.

It is utmost necessary to confer Honorary Degrees with due care and also in recognition their contribution to Society at large.

It shall be borne in mind that during the deliberation by the Syndicate the consideration for conferring such Honorary Degrees must be with regard to the service rendered to the Society at large or the outstanding service to any particular field as mentioned in Section 69 of the Karnataka State Universities Act, 2000. It must be borne in mind that discharge of duties in official capacity, whatever high be the office, shall not be taken into account, unless they have done outstanding contribution, meritorious and innovative works which have a lasting benefit to the Society are only to be considered for conferring of Honorary Degree.

It is necessary to note that while making recommendations for conferring Honorary Doctorate Degrees, the following guidelines need to be followed scrupulously.

1) The recommendation for the approval of the Chancellor for the conferment of the Honorary Degree shall be in conformity with Section 69 of the Karnataka State Universities Act, 2000.
2) The names before proposed must be properly considered and deliberated in the Syndicate.
3) After deliberation and consideration of such names in the Syndicate, the same shall be forwarded to the Scrutinizing Committee by the University.
4) The Chancellor may constitute expert scrutiny committee consisting of three members. One among the members of the Committee is the nominee of the University nominated from amongst the former Vice Chancellors, retired Secretaries of Govt. of Karnataka or Union of India.

5) The University may nominate its nominee to the Scrutinizing Committee well in advance.
6) The recommendations of the University for conferring Honorary Degree must be forwarded to the Scrutinizing Committee at least 45 days in advance to the date of Convocation.
7) The number of names proposed by the Scrutiny Committee to confer honorary degrees should not exceed more than three in a year.
8) The names proposed/recommended by the Syndicate of the University should be kept confidential and under no circumstances be disclosed to the recipient or to the Press till the approval of the Chancellor is communicated.

All the Universities should scrupulously observe all the aforesaid points.

These guidelines for scrutinizing the proposal for conferment of the Doctorate Degree is issued in exercise of the powers under section 12(2) r/w section 69 of the Karnataka State Universities Act, 2000. If there is any inconsistency with regard to guidelines issued by any other authority, this Circular will prevail and to be followed. These will come into effect from next academic year.

(Approved by
Hon'ble Governor & Chancellor)

8/2/16
(Dr. Vijayakumar N. Torgal)
Special Secretary to Governor.

**To:**

1) The Principal Secretary to Chief Minister, Vidhana Soudha, Bangalore.
2) The Pro-Chancellor and Hon'ble Minster for Higher Education, Vidhana Soudha, Bangalore.
3) The Chief Secretary to Government, Vidhana Soudha, Bangalore.
4) The Addl. Chief Secretary to Government, Education Department (Higher Education), M.S. Building, Bangalore.
5) The Vice-Chancellors of all Universities in Karnataka.
6) S.G.F/Spare Copies.

ಅನುಬಂಧ - 3

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ನಕಲಿ/ಅನಧಿಕೃತ ಪದವಿ/ಗೌರವ ಡಾಕ್ಟರೇಟ್ ಪದವಿಗಳನ್ನು ಪ್ರದಾನ ಮಾಡುತ್ತಿರುವ ಸಂಸ್ಥೆಗಳ ವಿರುದ್ಧ ಕಾನೂನು ಕ್ರಮ ಜರುಗಿಸುವ ಬಗ್ಗೆ.

ಓದಲಾಗಿದೆ: ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದ ಪತ್ರ ಸಂಖ್ಯೆ: D.O. No.F-1-2/2009 (AMPC), ದಿನಾಂಕ: 01-10-2020.

*****

ಪ್ರಸ್ತಾವನೆ:-

ಮೇಲೆ ಓದಲಾದ ಪತ್ರದಲ್ಲಿ ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗವು ಕೆಲವು ಪ್ರಕರಣಗಳನ್ನು ಉಲ್ಲೇಖಿಸಿ, ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದ ಕಾಯ್ದೆ 1956ರ ಸೆಕ್ಷನ್ 2(f) ಮತ್ತು (3)ರಡಿ ವಿಶ್ವವಿದ್ಯಾನಿಲಯದ ವ್ಯಾಪ್ತಿಯಡಿ ಬಾರದ ಸಂಸ್ಥೆಗಳು ವಿಶ್ವವಿದ್ಯಾನಿಲಯ ಪದನಾಮವನ್ನು ತಮ್ಮ ಸಂಸ್ಥೆಯ ಹೆಸರಿನೊಂದಿಗೆ ಬಳಸಿಕೊಂಡು ನಕಲಿ/ಅನಧಿಕೃತ ಪದವಿಗಳನ್ನು ಪ್ರಧಾನ ಮಾಡುತ್ತಾ ಮುಗ್ಧ ವಿದ್ಯಾರ್ಥಿಗಳಿಗೆ ವಂಚಿಸುತ್ತಿರುವ ಸಂಸ್ಥೆಗಳ ವಿರುದ್ಧ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಮತ್ತು ಸಂಬಂಧಿಸಿದ ಪೊಲೀಸ್ ಠಾಣೆಯಲ್ಲಿ ಪ್ರಥಮ ವರ್ತಮಾನ ವರದಿ ದಾಖಲಿಸಲು ಕ್ರಮವಹಿಸುವಂತೆ ಉನ್ನತ ಶಿಕ್ಷಣ ಇಲಾಖೆಯನ್ನು ಕೋರಿರುತ್ತದೆ. ಅದಲ್ಲದೇ, ಹೊರ ರಾಜ್ಯದ ವಿಶ್ವವಿದ್ಯಾನಿಲಯಗಳು ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಘಟಿಕೋತ್ಸವ ನಡೆಸಿ ನಕಲಿ / ಅನಧಿಕೃತ ಪದವಿ ಪ್ರಮಾಣ ಪತ್ರ/ಗೌರವ ಡಾಕ್ಟರೇಟ್ ಪದವಿಗಳನ್ನು ನೀಡುತ್ತಿರುವುದಾಗಿ ಆರೋಪಿಸಿ ದಿನಪತ್ರಿಕೆ ಹಾಗೂ ದೂರದರ್ಶನ ಮಾಧ್ಯಮಗಳಲ್ಲಿ ವರದಿಯಾಗುತ್ತಿರುವುದನ್ನು ಗಮನಿಸಿದೆ.

ಉನ್ನತ ಶಿಕ್ಷಣ ಇಲಾಖೆಯು ರಾಜ್ಯದಲ್ಲಿ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದ ಕೇಂದ್ರ ಸರ್ಕಾರದ ಕಾಯ್ದೆಗಳನ್ನು ಹಾಗೂ ಯುಜಿಸಿಯ ವಿನಿಯಮಗಳನ್ನು ಸುದೀರ್ಘವಾಗಿ ಜಾರಿಗೊಳಿಸುವ ಜವಾಬ್ದಾರಿ ಹೊಂದಿರುವುದರಿಂದ, ಸದರಿ ಅಂಶಗಳನ್ನು ಕೂಲಂಕಷವಾಗಿ ಪರಿಗಣಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 23 ಯುಎನ್‌ಇ 2021,**
**ಬೆಂಗಳೂರು, ದಿನಾಂಕ:26-02-2021.**

ಮೇಲಿನ ಪ್ರಸ್ತಾಪವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಯಾವುದಾದರೂ ಸಂಸ್ಥೆಯು ಯಾವುದೇ ರೀತಿಯ ನಕಲಿ/ ಅನಧಿಕೃತ ಪದವಿ/ ಗೌರವ ಡಾಕ್ಟರೇಟ್ ಪದವಿಗಳನ್ನು ಪ್ರಧಾನ ಮಾಡುತ್ತಿರುವುದು/ ಪ್ರಧಾನ ಮಾಡಲಿರುವುದು, ಮಾರಾಟ ಮಾಡುತ್ತಿರುವುದು ಕಂಡು

ಬಂದರೆ, ಅದಕ್ಕೆ ಕಾರಣ ಕರ್ತರಾದ ವ್ಯಕ್ತಿ / ಸಂಸ್ಥೆಯ ವಿರುದ್ಧ ಕೂಡಲೇ ಪೋಲೀಸ್ ಠಾಣೆಯಲ್ಲಿ ಪ್ರಥಮ ವರ್ತಮಾನ ವರದಿ ದಾಖಲಿಸಿ ಅಗತ್ಯ ಕ್ರಮ ಕೈಗೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಶೀತಲ್ ಎಂ. ಹಿರೇಮಠ)
ಸರ್ಕಾರದ ಅಧೀನ ಕಾರ್ಯದರ್ಶಿ.
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು-1).

26/02/2014

ಇವರಿಗೆ:

1. ಮಹಾಲೇಖಪಾಲರು, (ಲೆಕ್ಕಪತ್ರ/ಆಡಿಟ್), ಕರ್ನಾಟಕ, ಬೆಂಗಳೂರು --560 001.
2. ಆಯುಕ್ತರು, ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ, ಅರಮನೆ ರಸ್ತೆ, ಬೆಂಗಳೂರು.
3. ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ಕುಲಸಚಿವರು (ಆಡಳಿತ)- ಇವರಿಗೆ ಸೂಕ್ತ ಕ್ರಮಕ್ಕಾಗಿ.
4. ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು, ನಂ. 30, ಪ್ರಸನ್ನ ಕುಮಾರ ಬ್ಲಾಕ್, ಬೆಂಗಳೂರು, ಸೆಂಟ್ರಲ್ ವಿಶ್ವವಿದ್ಯಾಲಯ ಕ್ಯಾಂಪಸ್, ವೈ. ರಾಮಚಂದ್ರ ರಸ್ತೆ, ಗಾಂಧಿನಗರ, ಬೆಂಗಳೂರು --560 009.

ಪ್ರತಿ

1. ಉಪಮುಖ್ಯಮಂತ್ರಿಯವರ (ಉನ್ನತ ಶಿಕ್ಷಣ) ಆಪ್ತ ಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ, ಉನ್ನತ ಶಿಕ್ಷಣ (ವಿಶ್ವವಿದ್ಯಾಲಯಗಳು)/(ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ).
4. ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು-2/ಕಾಲೇಜು ಶಿಕ್ಷಣ/ಯೋಜನೆ)
5. ಇ-ಸಂಯೋಜಕರು, ಉನ್ನತ ಶಿಕ್ಷಣ ಇಲಾಖೆ.
6. ಶಾಖಾ ರಕ್ಷಾ ಕಡತ.